# 57

# ಅರಳಿದ ನಗು

ಮಹಾಪುರುಷರ ಜೀವನಕ್ಕೆ ಸಂಬಂಧಿಸಿದ
ಮನೋರಂಜಕ ಘಟನೆಗಳು.



ಸಂಗ್ರಾಹಕರು:
ಶ್ರೀ। ಬಳ್ಕೂರು ಸುಬ್ರಾಯ ಅಡಿಗ,
ಗಂಗೊಳ್ಳಿ.

1955.




ಒಂದಾಣೆ ಮಾಲೆ

# ಒಂದಾಣೆ ಮಾಲೆಯಲ್ಲಿ
## — ಈ ವರೆಗೆ ಪ್ರಕಟವಾದ ಪುಸ್ತಕಗಳು —

| | | |
|---|---|---|
| ೧. | ‡ಕೆಪ್ಪಟರಾಯ (ವಿನೋದ ಕಥೆ) | ದಿ| ಎಂ. ಎನ್. ಕಾಮತ್. |
| ೨. | ‡ನಾರೀಶ್ವರರು (ಏಕಾಂಕ ಪ್ರಹಸನ) | ಶ್ರೀ| ಕುಡ್ಪಿ ವಾಸುದೇವ ಶೆಣೈ. |
| ೩. | ‡ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು | ಶ್ರೀ| ಎಲ್. ಎಸ್. ನಾಯಕ್. |
| ೪. | ‡ಸದ್ರಿ ಸುಬ್ಬ (ಏಕಾಂಕ ಪ್ರಹಸನ) | ದಿ| ಎಂ. ಎನ್. ಕಾಮತ್. |
| ೫. | ‡ಅದ್ಭುತ ತ್ಯಾಗ ಮತ್ತು ಇತರ ಕಥೆಗಳು | ವೈದ್ಯಗುರು ಎಂ. ಆರ್. ಭಟ್. |
| ೬. | ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ) | ಕುಡ್ಪಿ ವಾಸುದೇವ ಶೆಣೈ. |
| ೭. | ‡'ಬೀಡಿ ಸೇದಬೇಡಿ' ಮತ್ತು 'ಅ ಮಗು' (ವಿನೋದ ಕಥೆಗಳು) | ದಿ| ಎಂ. ಎನ್. |
| ೮. | ‡ಇಂಗ್ಲಿಷ್-ಕನ್ನಡ ಅರ್ಥಕೋಶ (ಭಾರತ ಸಂವಿಧಾನದಿಂದ) | [ಕಾಮತ್. |
| ೯ | ‡ಲಂಚಕ್ಕೆ ಸಂಚಕಾರ | ಡಾ| ಎಸ್. ಪಿ. ಭಟ್. |
| ೧೦. | ‡ಟಿಶ್ಯೂ ಔಷಧಿಗಳ ಕೈಪಿಡಿ. | ಶ್ರೀ| ಪಿ. ಎಸ್. ವೆಂಕಟಕೃಷ್ಣರಾವ್ |
| ೧೧ | ಶ್ರೀಕ್ಷೇತ್ರ ಧರ್ಮಸ್ಥಳ (ತೃತೀಯ ಮುದ್ರಣ). | |
| ೧೨. | ಜೀವದ ಮೌಲ್ಯ ಮತ್ತು ಇತರ ಕಥೆಗಳು | ಶ್ರೀ| ಎಲ್. ಎಸ್. ನಾಯಕ್ |
| ೧೩ | ಸತ್ತವನ ಸೇಡು ಮತ್ತು ಇತರ ಕಥೆಗಳು | ಡಾ| ವಿ. ಆರ್. ಭಟ್ |
| ೧೪. | "ವೆಂಕಟನ ಸಂಕಟ" (ಏಕಾಂಕ ಪ್ರಹಸನ) ಮತ್ತು ಎರಡು ಕಥೆಗಳು | |
| ೧೫. | ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ) | ಶ್ರೀ| ಕುಡ್ಪಿ ವಾಸುದೇವ ಶೆಣೈ. |
| ೧೬. | ವೇಣೂರಿನ ಗತವೈಭವ | ದಿ| ಪಂಡಿತ ಲೋಕನಾಥ ಶಾಸ್ತ್ರಿಗಳು. |
| ೧೭. | ಒಗಟುಗಳು (ದ್ವಿತೀಯ ಮುದ್ರಣ) | ಶ್ರೀ| ಟಿ. ಚಂದ್ರರಾಜ ಸೆಟ್ಟಿ |
| ೧೮. | ಜಗಳಗಂಟ ಮತ್ತು ಇತರ ಕಥೆಗಳು | ವೈದ್ಯಗುರು ಎಂ. ಆರ್. ಭಟ್ |
| ೧೯. | ರಥೋತ್ಸವ. | |
| ೨೦. | ಕರಿನಾಯಿ ಮತ್ತು ಮುಪ್ಪು | ದಿ| ಎಂ. ಎನ್. ಕಾಮತ್ |
| ೨೧. | ‡ಭಾರತದ ಮಹಾನಗರಗಳು (ಪ್ರಥಮ ಭಾಗ) | ಶ್ರೀ| ಟಿ. ಚಂದ್ರರಾಜ ಸೆಟ್ಟಿ |
| ೨೨. | ತಿರುಕ್ಕುರಲ್ | ಶ್ರೀ| ಡಿ. ಪುಟ್ಟಸ್ವಾಮಿ, ಎಡ್ವೊಕೇಟ್ |
| ೨೩. | ಸೂರ್ಯನ ಸಂಸಾರ ಮತ್ತು ಇತರ ಕಥೆಗಳು | ಶ್ರೀ| ಬಿ. ಶಂಕರ ಭಟ್ |
| ೨೪. | ‡ಭಾರತದ ಮಹಾನಗರಗಳು (ದ್ವಿತೀಯ ಭಾಗ) | ಶ್ರೀ| ಟಿ. ಚಂದ್ರರಾಜ ಸೆಟ್ಟಿ |
| ೨೫. | ಧೈರ್ಯ ಮತ್ತು ಇತರ ಸತ್ಯ ಕಥಾನಕಗಳು | ಶ್ರೀ| ಎಲ್. ಎಸ್. ನಾಯಕ್ |
| ೨೬. | ‡ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ) | ಶ್ರೀ| ಜಿ.ಆರ್.ಪಾಂಡೇಶ್ವರ |
| ೨೭. | ಹಾಸವಿಲಾಸ (ಆರಿಸಿ ತೆಗೆದ ನಗೆಹನಿಗಳು) | ಶ್ರೀ|| ಕುಡ್ಪಿ ವಾಸುದೇವ ಶೆಣೈ |
| ೨೮. | ಸತ್ಯವಂತ ಬಾಬಿ [ಏಕಾಂಕ ಪ್ರಹಸನ] | ಶ್ರೀ| ಕುಡ್ಪಿ ವಾಸುದೇವ ಶೆಣೈ |
| ೨೯. | ಜಾಣ್ಮೆಯ ಒಗಟುಗಳು | ಡಾ| ಎಸ್. ಪಿ. ಭಟ್ |
| ೩೦. | ಜಾತಕ ಕಥೆಗಳು | ಶ್ರೀ| ಎಂ. ಸುಬ್ರಾಯನ್ |

(17ನೇ ಪುಟಕ್ಕೆ ಮುಂದುವರಿದಿದೆ.)

# ಅರಳಿದ ನಗು

(ಮಹಾಪುರುಷರ ಜೀವನಕ್ಕೆ ಸಂಬಂಧಿಸಿದ ಮನೋರಂಜಕ ಘಟನೆಗಳು)

೧. ಪಂಡಿತ ಈಶ್ವರಚಂದ್ರ ವಿದ್ಯಾಸಾಗರರು ಕಲಕತ್ತೆಯ ದೊಡ್ಡ ವಿದ್ವಾಂಸರಾಗಿದ್ದರು. ಅವರು ಬಹಳ ಸರಳತೆಯಿಂದ ಜೀವನ ನಡೆಸುತ್ತಿದ್ದರು. ಒಮ್ಮೆ ಆವರು ಪ್ರವಾಸಕ್ಕೆಂದು ಸ್ಟೇಶನ್ನಿಗೆ ಬಂದರು. ಉಗಿಬಂಡಿಯ ಒಂದು ಡಬ್ಬಿಯನ್ನೇರಿ, ಕುಳಿತುಕೊಳ್ಳಲು ಸ್ಥಳ ಹುಡುಕತೊಡಗಿದರು. ಒಂದು ಕಡೆ ಇಬ್ಬರು ಇಂಗ್ಲೀಷರು ಕುಳಿತಿದ್ದರು. ಅವರ ನಡುವೆ ಒಬ್ಬ ಮನುಷ್ಯನು ಕುಳಿತುಕೊಳ್ಳುವಷ್ಟು ಸ್ಥಳವಿತ್ತು. ಆದ್ದರಿಂದ ವಿದ್ಯಾಸಾಗರರು ಆ ಇಬ್ಬರ ನಡುವೆ ಕುಳಿತೇ ಬಿಟ್ಟರು.

ಇಂಗ್ಲೀಷರಿಗೆ ಆ ಕರಿ ಮನುಷ್ಯನ ಸಾಹಸವನ್ನು ಕಂಡು ಆಶ್ಚರ್ಯವಾಯಿತು. ಅಲ್ಲದೆ ಸಿಟ್ಟು ಬಂತು. ಒಬ್ಬನು ಸಿಟ್ಟಿನಿಂದ ಗರ್ಜಿಸುತ್ತ—'ಮೂರ್ಖ' ಎಂದು ಇಂಗ್ಲೀಷಿನಲ್ಲಿ ಬೈದನು. ಮತ್ತೊಬ್ಬನೂ ಅದೇ ರೀತಿ ಇಂಗ್ಲೀಷಿನಲ್ಲೇ 'ಕತ್ತೆ' ಎಂದನು. ಆಗಲೇ ವಿದ್ಯಾಸಾಗರರು ಅವರಿಬ್ಬರನ್ನೂ ಸರಿಯಾಗಿ ನೋಡಿ ಶಾಂತಸ್ವರದಲ್ಲಿ ಹೀಗೆಂದರು—'ಹೌದು, ನಾನು ಆ ಇಬ್ಬರ ನಡುವೆ ಕುಳಿತಿದ್ದೇನೆ.'

೦ ೦ ೦ ೦ ೦

೨. ಪ್ರಸಿದ್ಧ ಮಾನಸ ಶಾಸ್ತ್ರಜ್ಞರಾದ ಡಾ| ಅಲ್ಫ್ರೇಡ್ ಎಡಲರರು ಒಂದು ಸಭೆಯಲ್ಲಿ ಮಾತಾಡುತ್ತ '....ಮನುಷ್ಯನು ತನ್ನಲ್ಲಿನ ವಿಶಿಷ್ಟ ಕೊರತೆಯಿಂದಾಗಿಯೇ ತನ್ನ ಜೀವನವನ್ನು ಒಂದು ವಿಶಿಷ್ಟ ಲಕ್ಷ್ಯದ ಕಡೆಗೆ ಕೊಂಡೊಯ್ಯುತ್ತಾನೆ. ಉದಾಹರಣೆಗಾಗಿ ದೃಷ್ಟಿದೌರ್ಬಲ್ಯವುಳ್ಳವನಿಗೆ ಚಿತ್ರಕಾರನಾಗುವುದರ ಕಡೆಗೇ ಹೆಚ್ಚು ಒಲವಿರುತ್ತದೆ....' ಎಂದರು.

ಆಗಲೇ ಒಬ್ಬ ಸಭಾಸದನೆದ್ದು—'ಡಾಕ್ಟರ್ ಎಡಲರ್! ದುರ್ಬಲ ಮೆದುಳಿನ ಜನರೇ ಮಾನಸ ಶಾಸ್ತ್ರಜ್ಞರಾಗುತ್ತಾರೆಂದು ನಿಮ್ಮ ಭಾಷಣದ ಅರ್ಥವಲ್ಲವೆ?' ಎಂದು ಪ್ರಶ್ನಿಸಿದ.

೦ ೦ ೦ ೦ ೦

೩. ಪ್ರಸಿದ್ಧ ಲೇಖಕರಾದ ಕಿಪ್ಲಿಂಗರು ಕೆಲವು ಪುಸ್ತಕಗಳನ್ನು ಕೊಂಡುಕೊಳ್ಳಲು ಒಂದು ಅಂಗಡಿಗೆ ಹೋದರು. ಒಂದು ಪುಸ್ತಕವನ್ನು ಮೆಚ್ಚಿ ಅವರು ಅಂಗಡಿಗಾರನೊಡನೆ 'ಈ ಪುಸ್ತಕ ಹೇಗಿದೆ?' ಎಂದು ಕೇಳಿದರು.

'ನಾನಿದನ್ನು ಓದಿಲ್ಲ' ಅಂಗಡಿಗಾರನೆಂದ.

ಕಿಪ್ಲಿಂಗರು ಒಮ್ಮೆಲೇ ಸಿಟ್ಟಾದರು. 'ಯಾವುದಾದರೂ ಪುಸ್ತಕವನ್ನು ಕೊಳ್ಳುವಾಗ ಇದು ಒಳ್ಳೆಯದೆ? ಅಲ್ಲವೆ?'—ಎಂದು ನೀವೇಕೆ ಓದಿನೋಡುವುದಿಲ್ಲ?' ಎಂದು ಅವರು ಬಡಬಡಿಸಿದರು.

ಈ ವಿಚಿತ್ರ ಪ್ರಶ್ನೆಯನ್ನು ಕೇಳಿ ಅಂಗಡಿಗಾರನು ಅವರನ್ನೊಮ್ಮೆ ನೋಡಿದ ಮತ್ತು ಶಾಂತವಾಗಿ ಉತ್ತರಿಸಿದ: 'ಮಹಾಶಯರೆ! ನೀವು ಔಷಧ ಮಾರುತ್ತೀರೆಂದು ಭಾವಿಸಿರಿ. ಆಗ ಔಷಧ ಮಾರುವ ಮೊದಲು ನೀವದನ್ನು ರುಚಿನೋಡುತ್ತೀರೇನು?' ಕಿಪ್ಲಿಂಗರು ಕಣ್ಣರಳಿಸಿ ಅಂಗಡಿಗಾರನನ್ನೇ ನೋಡುತ್ತ ನಿಂತರು.

o o o o o

೪. ಪ್ರಖ್ಯಾತ ಲೇಖಕರಾದ ಮಾರ್ಕ್‌ಟ್ವೇನರು ಬಹು ವಿನೋದಿ ವ್ಯಕ್ತಿಗಳಾಗಿದ್ದರು. ಆದರೆ ಅವರ ಗೆಳೆಯರೊಬ್ಬರು ಅವರಿಗಿಂತಲೂ ಹೆಚ್ಚು ವಿನೋದಿಗಳಿದ್ದರು. ಒಂದು ದಿನ ಒಂದು ಸಭೆಗೆ ಅವರಿಬ್ಬರೂ ಆಮಂತ್ರಿತರಾಗಿದ್ದರು. ತಮ್ಮ ಸರದಿ ಬಂದಾಗ ಟ್ವೇನರು ಎದ್ದು ನಿಂತರು. ಮತ್ತು ಒಂದು ಗಂಟೆಯ ವರೆಗೆ ಭಾಷಣ ಮಾಡಿದರು. ಭಾಷಣವು ಸಾಕಷ್ಟು ಮನೋರಂಜಕವಾಗಿತ್ತು. ಟ್ವೇನರ ನಂತರ ಅವರ ಗೆಳೆಯರು ಭಾಷಣ ಮಾಡಬೇಕಿತ್ತು. ಅವರು ನಿಂತುಕೊಂಡು ಒಮ್ಮೆ ಸುತ್ತಲೂ ನೋಡಿ ಗಂಭೀರ ಧ್ವನಿಯಲ್ಲಿ ಹೇಳತೊಡಗಿದರು: 'ಸಜ್ಜನರೆ! ಸಭೆಗೆ ಬರುವ ಮೊದಲು ನಾನೂ ಟ್ವೇನರೂ ಪರಸ್ಪರವಾಗಿ ಒಂದು ಒಡಂಬಡಿಕೆ ಮಾಡಿಕೊಂಡಿದ್ದೆವು. ಅದರ ಮೇರೆಗೆ ಅವರು ನನ್ನ ಭಾಷಣವನ್ನೋದಿ ಹೇಳಿದರು. ನಾನೀಗ ಅವರ ಭಾಷಣವನ್ನೋದಿ ಹೇಳಬೇಕಾಗಿದೆ. ಆದರೆ ಅವರು ಕೊಟ್ಟ ಕಾಗದ ಎಲ್ಲೋ ಕಳೆದುಹೋದುದಕ್ಕಾಗಿ ಕಳವಳವಾಗುತ್ತಿದೆ. ಆದ್ದರಿಂದ ನಿರುಪಾಯನಾಗಿ ನನ್ನ ಸ್ಥಾನವನ್ನು ಸ್ವೀಕರಿಸುತ್ತೇನೆ.'

ಜನರೆಲ್ಲ ಬಲು ಜೋರಾಗಿ ಚಪ್ಪಾಳೆ ತಟ್ಟಿದರು. ಅವರಿಗೆ ಟ್ವೇನರ ಭಾಷಣಕ್ಕಿಂತಲೂ ಈ ಮಾತುಗಳಿಂದ ಹೆಚ್ಚು ಆನಂದವಾಗಿತ್ತು.

೦ ೦ ೦ ೦ ೦

೫. ಮರಾಠಿಯ ವಿಖ್ಯಾತ ಹಾಸ್ಯ ಲೇಖಕರಾದ ಆಚಾರ್ಯ ಅತ್ರೆಯವರು ಒಂದು ಸಭೆಯ ಅಧ್ಯಕ್ಷ ಸ್ಥಾನವನ್ನಲಂಕರಿಸಬೇಕಿತ್ತು. ಅವರು ಬರುವಾಗ ತುಸು ವಿಳಂಬವಾಯಿತು. ಸಭೆಯನ್ನು ಪ್ರಾರಂಭಿಸುತ್ತಾ ಅವರ ವಿನೋದಿ ಗೆಳೆಯರೊಬ್ಬರು ಹೀಗೆಂದರು: 'ಗೆಳೆಯರೆ! ಯಮರಾಜರು (ಈ ವ್ಯಂಗ್ಯ ಅತ್ರೆಯವರನ್ನು ಕುರಿತಾಗಿತ್ತು.) ಇನ್ನೂ ಬರಲಿಲ್ಲವೆಂದು ತಿಳಿಸಲು ವಿಷಾದವೆನಿಸುತ್ತದೆ............!' ಆದರೆ, ಅವರು ಈ ವಾಕ್ಯವನ್ನು ಹೇಳುತ್ತಿರುವಾಗಲೇ ಅತ್ರೆಯವರು ಅಲ್ಲಿಗೆ, ಬಂದುಬಿಟ್ಟರು.

ಪ್ರಾರಂಭ ಭಾಷಣವನ್ನೀಯುತ್ತ ಅತ್ರೆಯವರು ಹೀಗೆಂದರು—'ಮಿತ್ರರೆ! ನನ್ನ ವಾಹನವು (ಕೋಣ) ಕಳೆದು ಹೋಗಿದ್ದುದರಿಂದ ನನಗೆ ಬರಲು ಇಷ್ಟು ತಡವಾಯಿತು. ಆದರೆ ಅದು ನನಗಿಂತಲೂ ಮೊದಲೇ ಇಲ್ಲಿಗೆ ಬಂದುಬಿಟ್ಟಿದೆಯೆಂದು ಇದೀಗ ತಿಳಿದು ಬಂತು!'

೦ ೦ ೦ ೦ ೦

೬. ಲಿಪಿವಿಶೇಷಜ್ಞನಾದ ಬಾಲಜಾಕ್ ಯಾರದಾದರೂ ಬರವಣಿಗೆಯನ್ನು ನೋಡಿ ಅವರ ವ್ಯಕ್ತಿತ್ವದ ಬಗ್ಗೆ ಎಲ್ಲ ವಿಷಯಗಳನ್ನು ತಿಳಿಸಿಬಿಡುತ್ತಿದ್ದ. ತಾನು ಮಹಾ ವಿಶೇಷಜ್ಞನೆಂಬ ಅಹಂಕಾರವೂ ಅವನಿಗಿತ್ತು. ಒಮ್ಮೆ ಮಹಿಳೆಯೊಬ್ಬಳು 'note book'ವೊಂದನ್ನು ತಂದು ಅವನಿಗಿತ್ತಳು. ಅದು ಸಣ್ಣ ಹುಡುಗನೊಬ್ಬನ ಪುಸ್ತಕವಾಗಿತ್ತು. ಬಹು ಹೊತ್ತು ತಲೆ ಕೆರೆದುಕೊಂಡ ನಂತರ ಬಾಲಜಾಕ್ ಆ ಮಹಿಳೆಯೊಡನೆ 'ನೀವು ಈ ಹುಡುಗನ ತಾಯಿಯೋ?' ಎಂದು ಕೇಳಿದ. 'ಅಲ್ಲ, ಇವನಿಗೂ ನನಗೂ ಯಾವ ಸಂಬಂಧವೂ ಇಲ್ಲ.' ಅವಳೆಂದಳು.

'ಹಾಗಿದ್ದರೆ ಸರಿ, ಈಗ ನಾನು ನಿಮಗೆ ಈ ಹುಡುಗನ ಕುರಿತು ನಿಸ್ಸಂಕೋಚವಾಗಿ ಹೇಳಬಲ್ಲೆ. ಅಕ್ಷರಗಳನ್ನು ಪರಿಶೀಲಿಸುವಾಗ ಈ ಹುಡುಗನು ಶುದ್ಧ ಮೂರ್ಖನೆಂದೂ ಕೆಲಸಗಳ್ಳನೆಂದೂ ತಿಳಿದು ಬರುತ್ತಿದೆ. ಅಲ್ಲದೆ ಇವನು ಜೀವನದಲ್ಲೆಂದೂ ಯೋಗ್ಯ ಮನುಷ್ಯನೆನಿಸಲಾರ' ಬಾಲಜಾಕ್ ಹೇಳಿದ.

ಮಹಿಳೆಯು ಗೊಳ್ಳೆಂದು ನಕ್ಕುಬಿಟ್ಟಳು. 'ಮಹಾಶಯರೇ, ಈ ನೋಟ್‌ಬುಕ್ ನಿಮ್ಮದೇ, ಚಿಕ್ಕಂದಿನಲ್ಲಿ ಇದನ್ನು ನೀವು ನಿಮ್ಮ ಬಳಿ ಇಟ್ಟು ಕೊಳ್ಳುತ್ತಿದ್ದೀರಿ!'

o o o o o

೭. ಒಮ್ಮೆ ಒಬ್ಬರು ಅಮೇರಿಕದ ಹಿಂದಿನ ರಾಷ್ಟ್ರಾಧ್ಯಕ್ಷರಾದ ಅಬ್ರಾಹಮ್ ಲಿಂಕನರನ್ನು ಭೇಟಿಯಾಗಲು ಬಂದರು. ಅವರು ಲಿಂಕನರ ಪೂರ್ವ ಪರಿಚಿತರಿದ್ದುದರಿಂದ ನೇರಾಗಿ ಅವರ ಕೋಣೆಗೇ ಹೋಗಿಬಿಟ್ಟರು. ಲಿಂಕನರು ಆಗ ತಮ್ಮ ಬೂಟ್ಸುಗಳಿಗೆ ಪಾಲಿಶ್ ಹಾಕುತ್ತಿದ್ದರು. ಆಗಂತುಕರು ಈ ದೃಶ್ಯವನ್ನು ಕಂಡು ಬೆರಗಾದರು.

'ನೀವು ನಿಮ್ಮ ಬೂಟ್ಸುಗಳಿಗೆ ಸ್ವತಃ ಪಾಲಿಶ್ ಹಾಕುತ್ತೀರಾ?'— ಅವರು ಪ್ರಶ್ನಿಸಿದರು.

ಲಿಂಕನರು ಸುಮ್ಮನೆ ಬಿಡುವವರಲ್ಲ. 'ಹೌದು, ಆದರೆ ನಿಮಗೆ ಬೇರೆಯವರ ಬೂಟ್ಸುಗಳಿಗೆ ಪಾಲಿಶ್ ಹಾಕುವುದೇ ಹೆಚ್ಚು ಇಷ್ಟವೆಂದು ಕಾಣುತ್ತದೆ, ಅಲ್ಲವೆ?' ಎಂದು ಕೇಳಿದರು.

o o o o o

೮. ವಿನ್‌ಸ್ಟನ್ ಚರ್ಚಿಲರು ತಮ್ಮ ಗಾಂಭೀರ್ಯಕ್ಕೆ ಪ್ರಖ್ಯಾತರಾಗಿದ್ದಾರೆ. ಸಿಟ್ಟಾದಾಗ ಅವರ ವ್ಯಂಗ್ಯ ಪ್ರವೃತ್ತಿ ತುಂಬಾ ತೀಕ್ಷ್ಣವಾಗುತ್ತದೆ.

ಒಂದು ದಿನ ಚರ್ಚಿಲ್ ಹಾಗೂ ಅವರ ಚಿಕ್ಕಪ್ಪನ ಮಗ ಲಾರ್ಡ್ ಲಂಡನ್‌ಡೇರಿ— ಇಬ್ಬರೂ ಒಂದು ಔತಣಕ್ಕೆ ಆಮಂತ್ರಿತರಾಗಿದ್ದರು. ಯಾವುದೋ ವಿಚಾರಕ್ಕಾಗಿ ಅವರಿಬ್ಬರಲ್ಲೂ ವಿವಾದವುಂಟಾಯಿತು.

ಮಾತುಕತೆಯ ಈ ಅನಪೇಕ್ಷಿತ ಕ್ರಮವನ್ನು ಬದಲಿಸುವುದಕ್ಕಾಗಿ ಲಾರ್ಡ್ ಲಂಡನ್ ಡೇರಿಯವರು–'ನೀವು ನನ್ನ ಇತ್ತೀಚಿಗಿನ ಪುಸ್ತಕವ ನ್ನೋದಿದ್ದೀರಾ?' ಎಂದು ಕೇಳಿದರು.

'ನಾನೇಕೆ ಓದಲಿ? ನನಗೆ ಮನೋರಂಜನೆಯಾಗಲೀ ಲಾಭವಾಗಲೀ ಆಗುವಂತಹ ಪುಸ್ತಕವನ್ನು ಮಾತ್ರ ನಾನೋದುತ್ತೇನೆ'— ಚರ್ಚಿಲರು ಆವೇಶದಲ್ಲೇ ಉತ್ತರವಿತ್ತರು.

o o o o o

೯. ಒಮ್ಮೆ ಲಂಡನ್ನಿನ ಹೈಡ್ ಪಾರ್ಕಿನಲ್ಲಿ ಮಾರ್ಕ್ ಟ್ವೇನರ ಭಾಷಣವಿತ್ತು. ಆ ಸಭೆಗೆ ನವಯುವಕ ಬರ್ನಾರ್ಡ್ ಶಾರವರೂ ಆಮಂತ್ರಿತರಾಗಿದ್ದರು. ಟ್ವೇನರ ಮಾರುದ್ದದ ಭಾಷಣದ ಬಳಿಕ ಶಾ ಎದ್ದು ನಿಂತರು. ಈ ಭಾಷಣವನ್ನು ಟ್ವೇನರು ಕೇಳಬೇಕೆಂದೂ ಶಾ ತಮ್ಮಷ್ಟೇ ಸಮರ್ಥ ಭಾಷಣಕಾರರೆಂದು ಟ್ವೇನರು ಒಪ್ಪಿಕೊಳ್ಳಬೇಕೆಂದೂ ಅವರು ಆಸೆಪಟ್ಟಿದ್ದರು. ಆದರೆ ಆಗಲೇ ಟ್ವೇನರು ತಮ್ಮ ಕಾರಿನಲ್ಲಿ ಕುಳಿತು ಹೋಗಿಬಿಡಲು 'ಶಾ'ರಿಗೆ ತುಂಬಾ ನಿರಾಶೆಯಾಯಿತು.

ಈ ಘಟನೆ ಸಂಭವಿಸಿ ಸುಮಾರು ೨೦ ವರ್ಷಗಳ ಬಳಿಕ ಪುನಃ ಅವರಿಗೆ ಯೋಗ್ಯ ಸಂದರ್ಭ ದೊರೆಯಿತು. ಈ ಬಾರಿ ತಾವು ಟ್ವೇನರಿಗಿಂತಲೂ ಮೊದಲೇ ಭಾಷಣ ಮಾಡಬೇಕೆಂದು ಶಾ ನಿರ್ಧರಿಸಿದರು. ಹಾಗೆಯೇ ಆಯಿತು. ಶಾ ಸುಮಾರು ಎರಡು ಗಂಟೆಗಳ ತನಕ ಭಾಷಣದ ಸುರಿಮಳೆಯನ್ನೇ ಸುರಿಸಿ, ಟ್ವೇನರೊಡನೆ 'ನನ್ನ ಭಾಷಣ ಹೇಗಾಯಿತು?' ಎಂದು ಪ್ರಶ್ನಿಸಿದರು. ಉತ್ತರ ರೂಪವಾಗಿ ತಾವು ಈ ೧೫ ವರ್ಷಗಳಿಂದೀಚೆಗೆ ಸಂಪೂರ್ಣ ಕಿವುಡರಾಗಿದ್ದೇವೆಂದೂ ಭಾಷಣದ ಒಂದೇ ಒಂದು ಶಬ್ದವೂ ತಮ್ಮ ಕಿವಿಗೆ ಬೀಳಲಿಲ್ಲವೆಂದೂ ಟ್ವೇನ್ ತಿಳಿಸಿದಾಗ, ಶಾ ಪುನಃ ನಿರಾಶಾಗರ್ತದಲ್ಲಿ ಬಿದ್ದುಬಿಟ್ಟರು.

ಈ ಘಟನೆಯು ತಮ್ಮ ಜೀವನದ ಬಹು ದೊಡ್ಡ ಸೋಲೆಂದು ಅವರು ಆಗಾಗ್ಗೆ ಹೇಳುತ್ತಿದ್ದರು.

೦ ೦ ೦ ೦ ೦

೧೦. ಫ್ರಾನ್ಸಿನ ಇಬ್ಬರು ಹೆಸರಾಂತ ಕಾದಂಬರಿಕಾರರಾದ ಅಲೆಕ್ಸಾಂಡರ್ ಡ್ಯೂಮಾ ಮತ್ತು ವಿಕ್ಟರ್ ಹ್ಯೂಗೋ ಒಮ್ಮೆ ದಾರಿಯಲ್ಲಿ ಭೇಟಿಯಾದರು. ಡ್ಯೂಮಾ ಮಾತುಕತೆಯ ವೇಳೆ 'ನಾವಿಬ್ಬರೂ ಸೇರಿ ಒಂದು ಅಮರಕೃತಿಯನ್ನೇಕೆ ರಚಿಸಬಾರದು?' ಎಂದು ಹೇಳಿದ.

ಈ ಸೂಚನೆ ಹ್ಯೂಗೋವಿಗೆ ಇಷ್ಟವೆನಿಸಲಿಲ್ಲ. ಅವನು ತುಸು ಬಿರುಸು ದನಿಯಲ್ಲಿ 'ಇದು ಸರ್ವಥಾ ಅಸಂಭವ; ಎಲ್ಲಾದರೂ ಕುದುರೆ ಮತ್ತು ಕತ್ತೆಗಳು ಒಟ್ಟು ಸೇರುವುದುಂಟೇ?' ಎಂದ.

'ಆಗಲಿ, ನೀವು ನನ್ನ ಸೂಚನೆಯನ್ನೊಪ್ಪದಿದ್ದರೆ ಚಿಂತಿಲ್ಲ. ಆದರೆ ದಯಮಾಡಿ, ನನ್ನನ್ನು ಕುದುರೆಯೆಂದು ಹೇಳಬೇಡಿ' ಡ್ಯೂಮಾ ಉತ್ತರವಿತ್ತ.

ಹ್ಯೂಗೊ ನಿರುತ್ತರನಾದ. ಡ್ಯೂಮಾ ತನ್ನನ್ನು ಚಾತುರ್ಯದಿಂದ ಕತ್ತೆಯನ್ನಾಗಿ ಮಾಡಿದನೆಂದು ಅವನಿಗರ್ಥವಾಯಿತು.

o o o o o

೧೧. ಸಮ್ರಾಟ್ ೫ನೇ ಜಾರ್ಜರಿಗೆ ಬಾಲ್ಯದಲ್ಲಿ ಮನಬಂದಂತೆ ಖರ್ಚುಮಾಡುವ ಚಟವಿತ್ತು. ಅವರ ಶಾಲಾ ಜೀವನದ ಘಟನೆಯೊಂದು ತುಂಬ ಮನೋರಂಜಕವಾಗಿದೆ.

ಒಮ್ಮೆ ಅವರು ತುಸು ಹೆಚ್ಚು ಹಣ ಕಳಿಸುವಂತೆ ತಂದೆಗೆ ಕಾಗದ ಬರೆದರು. 'ನಿನ್ನ ನಡತೆಯನ್ನು ತಿದ್ದಿಕೋ ಮತ್ತು ಒಬ್ಬ ವ್ಯಾಪಾರಿಯಂ ತಾಗಲು ಕಲಿ' ಎಂದು ತಂದೆ ಗದರಿಸಿ ಅವರಿಗೆ ಕಾಗದ ಬರೆದರು.

ಮರುದಿನವೇ ತಂದೆಯ ಬಳಿ ಮಗನ ಕಾಗದ ತಲಪಿತು. 'ನಾನು ನಿಮ್ಮ ಅಪ್ಪಣೆಯಂತೆಯೇ ನಡೆಯಲು ಕಲಿತಿದ್ದೇನೆ. ಆದುದರಿಂದ ನಿಮ ಆ ಪತ್ರವನ್ನು 'ಏಲಂ' ಹಾಕಿ, ೨೫ ಪೌಂಡುಗಳಿಗೆ ಮಾರಿಬಿಟ್ಟೆ.'

o o o o o

೧೨. ಇಂಗ್ಲೆಂಡಿನ ಪ್ರಖ್ಯಾತ ಕವಿ ಶೇರೀಡನ್ ಒಮ್ಮೆ ಎಷ್ಟೊ ಜನ ರಿಗೆ ಹಣ ಕೊಡಬೇಕಾಯಿತು. ತನ್ನ ಸಾಲ ತೀರಿಸುವಷ್ಟು ಹಣ ಅವನ ಬಳಿಯಲ್ಲಿರಲಿಲ್ಲ. ಹೀಗಾಗಿ ಸಾಲಿಗರ ಕಾಟವನ್ನು ತಪ್ಪಿಸಿಕೊಳ್ಳಲೆಂದು ತಲೆಮರೆಸಿಕೊಂಡು ದಿನಗಳೆಯುತ್ತಿದ್ದ. ಆದರೂ ಒಮ್ಮೆ ಕಾರ್ಯಾರ್ಥ ವಾಗಿ ಎಲ್ಲಿಗೋ ಹೋಗುತಿದ್ದಾಗ ಸಾಲಿಗನೊಬ್ಬ ಕುದುರೆಯನ್ನೇರಿ ಎದುರು ಬಂದೇಬಿಟ್ಟ. ಶೇರಿಡನ್ ತುಂಬಾ ಚಡಪಡಿಸಿದ. ಅಡಗಿಕೊಳ್ಳಲು ಯಾವ ಜಾಗವೂ ಇರಲಿಲ್ಲ. ನಿರುಪಾಯನಾದರೂ ಎದೆಗುಂದದೆ ಕವಿಯು ಎದುರು ಬಂದು—'ಓ! ಇಂದು ನೀವು ತುಂಬಾ ಚಂದವಾಗಿ ಕಾಣುತ್ತಿದ್ದೀರಿ. ಕುದು ರೆಯೂ ಬಹು ಸುಂದರವಾಗಿದೆ!' ಎಂದ.

ಸಾಹುಕಾರ ಈ ಹೊಗಳಿಕೆಯಿಂದ ಉಬ್ಬಿಹೋದ. 'ಕುದುರೆ ನಿಮ್ಮ ಮನಸ್ಸಿಗೆ ಬಂತೆ?' ಎಂದು ಠೀವಿಯಿಂದ ಕೇಳಿದ.

'ಇಷ್ಟು ಚಂದದ ಕುದುರೆ ಯಾರ ಮನಸ್ಸನ್ನು ತಾನೆ ಸೂರೆಗೊಳ್ಳದು? ಬಹುಶಃ ಇದರ ಓಟವೂ ಅದ್ಭುತವಿರಬಹುದೆಂದು ನನ್ನೆಣಿಕೆ' ಶೇರೀಡನ್ ಹೇಳಿದ.

'ಹೌದು, ಹೌದು' ಎನ್ನುತ್ತಾ ಸಾಹುಕಾರನು ಕುದುರೆಗೆ ಬಾರು ಕೋಲಿನಿಂದ ಹೊಡೆದು 'ನೋಡಿ, ಇದೀಗ ಇದರ ನಡಿಗೆಯನ್ನು ತೋರಿಸುತ್ತೇನೆ' ಎಂದ.

ಕುದುರೆ ಬಾರುಕೋಲಿನ ಏಟು ತಿಂದು ನಾಗಲೋಟದಿಂದ ಓಡ ತೊಡಗಿತು. ಇತ್ತ ಶೇರಿಡನ್ ತನ್ನ ಚಾತುರ್ಯಕ್ಕಾಗಿ ಮನದಲ್ಲೇ ನಗುತ್ತಾ ಓಣಿಯೊಂದರಲ್ಲಿ ಕಣ್ಮರೆಯಾದ.

o o o o o

೧೩. ಧುರಂಧರ ಸಾಹಿತಿಗಳಾದ ಚೇಸ್ಟರ್‌ಟನ್ ಸಾಕಷ್ಟು ದಷ್ಟ ಪುಷ್ಟರಾಗಿದ್ದರು. ಒಮ್ಮೆ ಕ್ಷೀಣದೇಹಿಗಳಾದ 'ಶಾ'ರೊಡನೆ ಅವರು ತಮಾಷೆಗಾಗಿ "ಮಿಸ್ಟರ್ ಶಾ, ವಿದೇಶಗಳಲ್ಲಿ ಜನ ನಿಮ್ಮನ್ನು ಕಂಡು ಇಂಗ್ಲೆಂಡಿನಲ್ಲಿ ಬರಗಾಲ ಬಂದಿರಬಹುದೆಂದು ಯೋಚಿಸಬಹುದು' ಎಂದರು.

'ನಿಮ್ಮನ್ನು ನೋಡುತ್ತಲೇ ಬರಗಾಲಕ್ಕೇನು ಕಾರಣವೆಂದು ಅವರಿಗರ್ಥವಾಗುವುದು!' ವಿನೋದಿ ಶಾ ಕೂಡಲೇ ಉತ್ತರವಿತ್ತರು.

o o o o o

೧೪. ಸರ್ ಆಶುತೋಷರು ಒಮ್ಮೆ ಬಹು ಸಾಧಾರಣ ವೇಷದಲ್ಲಿ ರೈಲಿನ I ಕ್ಲಾಸ್ ಡಬ್ಬಿಯಲ್ಲಿ ಪ್ರವಾಸಗೈಯುತ್ತಿದ್ದರು. ಆ ಡಬ್ಬಿಯಲ್ಲೇ ಒಬ್ಬ ಆಂಗ್ಲೇಯನೂ ಇದ್ದ. ತನ್ನೊಟ್ಟಿಗೆ ಭಾರತೀಯನೊಬ್ಬನು ಕುಳಿತಿರುವುದು ಅವನಿಗೆ ಅಷ್ಟೇನೂ ರುಚಿಸಲಿಲ್ಲ. 'ಡಬ್ಬಿ ಬದಲಾಯಿಸಿರಿ'ಂದು ಅವನು ಅನೇಕ ಸಲ ಅವರಿಗೆ ತಿಳಿಸಿದ. ಆದರೆ ಅವರು ಮಾತಾಡದೇ ಅಲ್ಲೇ ಇದ್ದರು. ಆಂಗ್ಲೇಯನ ಸಿಟ್ಟು ಏರುತ್ತ ಹೋಯಿತು. ರಾತ್ರಿ ಆಶುತೋಷರು ನಿದ್ದೆ ಹೋದಾಗ ಅವನು ಅವರ ಮೆಟ್ಟನ್ನು ಕಿಟಕಿಯಿಂದ ಹೊರಗೆ ಎಸೆದು ಬಿಟ್ಟ. ಬೆಳಗ್ಗೆ ಆಶುತೋಷರು ಎಚ್ಚೆತ್ತಾಗ, ಸಹಯಾತ್ರಿಕನ ಈ ತುಂಟತನ ಅವರಿಗೆ ಗೊತ್ತಾಯಿತು. ಆಂಗ್ಲೇಯನು ಆರಾಮವಾಗಿ ಗೊರಕೆಹೊಡೆಯುತ್ತಿದ್ದ. ಅವರು ಸಮೀಪವೇ ಇದ್ದ ಅವನ ಕೋಟನ್ನೆತ್ತಿ ಕಿಟಕಿಯ ಹೊರಗೆ ಎಸೆದುಬಿಟ್ಟರು. ತುಸು ಹೊತ್ತಿನಲ್ಲೇ ಆಂಗ್ಲೇಯನು ಎಚ್ಚೆತ್ತು ಅತ್ತಿತ್ತ ಹುಡುಕಿ 'ನನ್ನ ಕೋಟೆಲ್ಲಿ?' ಎಂದು ಕೇಳಿದ. 'ನಿಮ್ಮ

ಕೋಟು........? ಬಹುಃಶ ಅದು ನನ್ನ ಮೆಟ್ಟು ತರಲು ಹೋಗಿರಬೇಕು'
ಆಶುತೋಷರು ಮುಗುಳ್ನಗುತ್ತಾ ಉತ್ತರವಿತ್ತರು.

೦ ೦ ೦ ೦ ೦

೧೫ ೧೯೫೧ರಲ್ಲಿ ರಾಷ್ಟ್ರಪತಿ ರಾಜೇಂದ್ರ ಪ್ರಸಾದರು ಧಿಲ್ಲಿ ವಿಶ್ವ ವಿದ್ಯಾಲಯಕ್ಕೆ ಆಮಂತ್ರಿತರಾಗಿದ್ದರು. ಊಟ ಮುಗಿದ ಬಳಿಕ ಅವರು ವಿದ್ಯಾರ್ಥಿಗಳಿಗೆ 'ಒಟೋಗ್ರಾಫ್' ಕೊಡತೊಡಗಿದರು. ಏನನ್ನು ಬರದೊಯ್ದರೂ ಅವರು ಅದರ ಮೇಲೆ ಹಸ್ತಾಕ್ಷರ ಹಾಕುತ್ತಿದ್ದರು. ಒಬ್ಬ ಚತುರ ವಿದ್ಯಾರ್ಥಿಯು ರಾಜೇಂದ್ರ ಪ್ರಸಾದರನ್ನು ತಮಾಷೆಗೆ ಗುರಿಪಡಿಸಬೇಕೆಂದು ಲೆಕ್ಕ ಹಾಕಿದ. ಅವನು ತನ್ನ ಪುಸ್ತಕದಲ್ಲಿ 'ನಮ್ಮ ಸರಕಾರವು ನಿಮ್ಮನ್ನು ಬಹು ಸಂತೋಷದಿಂದ ಸ್ವರ್ಗದ ಗವರ್ನರರನ್ನಾಗಿ ನೇಮಿಸುತ್ತದೆ' ಎಂದು ಬರೆದ.

ಹಸ್ತಾಕ್ಷರದ ಬಳಿಕ ತನ್ನ ಪುಸ್ತಕವನ್ನು ಅವನು ನೋಡಿದ. 'ನಮ್ಮ ಸರಕಾರವು ನಿಮ್ಮನ್ನು ಬಹು ಸಂತೋಷದಿಂದ ಸ್ವರ್ಗದ ಗವರ್ನರರನ್ನಾಗಿ ನೇಮಿಸುತ್ತದೆ. ಆದರೆ ಪ್ರಕೃತ ಅಲ್ಲಿ ಸ್ಥಳವಿಲ್ಲದ ಕಾರಣ ನಿಮ್ಮನ್ನು ನರಕದ ಗವರ್ನರರನ್ನಾಗಿ ನಿಯುಕ್ತಗೊಳಿಸಲಾಗುತ್ತದೆ!' ಎಂದು ಬರೆದು ಕೆಳಗೆ ರಾಜೇಂದ್ರ ಪ್ರಸಾದರು ಸಹಿ ಹಾಕಿದ್ದರು!

೦ ೦ ೦ ೦ ೦

೧೬. ಜಾರ್ಜ್ ಬರ್ನಡ್ ಶಾರ ಜೀವನದಲ್ಲಿ ಘಟಿಸಿದ ಒಂದು ಘಟನೆ ತುಂಬ ಮನೋರಂಜಕವಾಗಿದೆ. ಆಗ ಅವರ ವ್ಯಂಗ್ಯ ಪ್ರವೃತ್ತಿಯೆಲ್ಲ ಹಾರಿಹೋಯಿತು. ಆ ಘಟನೆ ಇಂತಿದೆ—

ಒಂದು ದಿನ ಅವರಿಗೆ ಒಂದು ಅಂಗಡಿಯಲ್ಲಿ ತಮ್ಮ ಪುಸ್ತಕ 'ಪಿಗ್ಮೇಲಿಯನ್'ನ ಒಂದು ಹಳೇ ಪ್ರತಿ ಕಂಡುಬಂತು. ಅದರಲ್ಲಿ ಇಡೀ ಒಂದು ಪುಟದ ಮೇಲೆ ಅವರ ಬರವಣಿಗೆಯಲ್ಲೇ ಕೆಲವು ಪಂಕ್ತಿಗಳು ಬರೆಯಲ್ಪಟ್ಟಿದ್ದವು. ತಮ್ಮ ಇಂಥ ಮಿತ್ರನು, ತಾವು ಉಪಹಾರವಾಗಿ ಕೊಟ್ಟ ಪುಸ್ತಕವನ್ನು ಹೀಗೆ ಮಾರಿಬಿಟ್ಟಿದ್ದಾನೆಂದು ಅವರಿಗೆ ಅರಿವಾಯಿತು. ತಾವು ಪುನಃ ಅದೇ ಪುಸ್ತಕವನ್ನು ಕಳುಹಿಸಿ ಆ ಮಿತ್ರನನ್ನು ಲಜ್ಜೆಗೆ ಗುರಿಪಡಿಸಬೇಕೆಂದು ಅವರು ಅದರ ಬೆಲೆ ಕೇಳಿದರು. ಅಂಗಡಿಗಾರನು ಪುಸ್ತಕವನ್ನು ಒಮ್ಮೆ

ಅತ್ತಿತ್ತ ಮುಗುಚಿ ನೋಡಿ ಬೇಸರದ ದನಿಯಲ್ಲಿ 'ಪುಸ್ತಕದ ನಿಜವಾದ ಬೆಲೆ ೧೨ ಶಿಲಿಂಗುಗಳು. ಆದರೆ ಯಾವನೋ ಕತ್ತೆಯೊಬ್ಬನು ಇಡೀ ಪುಟವನ್ನೆ ಗೀಚಿ ಹಾಳು ಮಾಡಿಬಿಟ್ಟಿದ್ದಾನೆ. ಆದಕ್ಕಾಗಿ ನಿಮಗಿದನ್ನು ಮೂರು ಶಿಲಿಂಗುಗಳಿಗೇ ಕೊಡುತ್ತೇನೆ!' ಎಂದ.

o o o o o

೧೭. ಅಮೇರಿಕದ ರಾಷ್ಟ್ರಪತಿಗಳಾಗಿದ್ದ ಕಾಲ್ವಿನ್ ಕೂಲಿಜ್ ಬಹಳ ಮಿತಭಾಷಿಗಳಾಗಿದ್ದರು. ಈ ಅಭ್ಯಾಸಕ್ಕಾಗಿ ಅವರ ಪತ್ನಿಯೂ ಬೇಸತ್ತಿದ್ದಳು. ಒಂದು ಆದಿತ್ಯವಾರ ಇಗರ್ಜಿಯಿಂದ ಹಿಂದಿರುಗಿದ ಬಳಿಕ ಅವರ ಪತ್ನಿಯು 'ಇಂದು ಪಾದರಿಗಳ ಪ್ರಾರ್ಥನೋತ್ತರ ಪ್ರವಚನವನ್ನು ಕೇಳಿದಿರಾ?' ಎಂದಳು. 'ಹೌದು' ಕೂಲಿಜ್ ಉತ್ತರಿಸಿದರು. 'ಆದರ ತಿರುಳೇನಿತ್ತೆಂದು ತಿಳಿಸಬಲ್ಲಿರಾ?'—ಅವರ ಬಾಯಿಯಿಂದ ಮಾರುದ್ದದ ಭಾಷಣವನ್ನೇ ಹೊರಡಿಸಬೇಕೆಂಬ ಆಸೆಯಿಂದ ಪತ್ನಿ ಪ್ರಶ್ನಿಸಿದಳು. ಆದರೆ ಕೂಲಿಜರು ಸಂಕ್ಷೇಪವಾಗಿ 'ಪಾಪ' ಎಂದರು. 'ಸರಿ, ಆದರೆ ಅವರು ಈ ವಿಚಾರವಾಗಿ ಏನು ಹೇಳುತಿದ್ದರೆಂದು ತುಸು ವಿಸ್ತಾರವಾಗಿ ಹೇಳಿರಿ.'

ಕೂಲಿಜರು ಅದೇ ಶಾಂತ ಸ್ವರದಿಂದ ಉತ್ತರಿಸಿದರು—'ಅವರು ಇದರ ವಿರುದ್ಧವಾಗಿ ಭಾಷಣ ಮಾಡುತ್ತಿದ್ದರು.'

o o o o o

೧೮. ಒಂದು ದಿನ ಡಾ। ಜಾನಸನ್ ಒಬ್ಬ ವಾಯುಲಿನ್ ವಾದಕನ ವಾಯುಲಿನ್ ಕೇಳಬೇಕಾಯಿತು. ಸಾಕಷ್ಟು ಸಮಯದ ವರೆಗೆ ತನ್ನ ಕಲೆಯನ್ನು ಪ್ರದರ್ಶಿಸಿದ ಬಳಿಕ ಆ ಕಲಾಕಾರ ಅಭಿಮಾನದಿಂದ 'ವಾಯುಲಿನ್ ಬಾರಿಸುವುದು ಆದೆಷ್ಟು ಕಷ್ಟಕರವೆಂದು ನೋಡಿದಿರಾ, ನೀವು?' ಎಂದನು.

ಡಾ। ಜಾನಸನ್ ಗಂಭೀರರಾಗಿ ಹೀಗೆಂದರು: 'ಅದು ಅಸಂಭವವೇ ಆಗಿದ್ದರೆ ಇನ್ನಷ್ಟು ಉತ್ತಮವಾಗುತ್ತಿತ್ತು!'

o o o o o

೧೯. ವಾಶಿಂಗ್ಟನ್ನಿನಲ್ಲಿರುವ ಫ್ರೆಂಚ್ ರಾಜದೂತಾಲಯದಲ್ಲಿ ಪ್ರೀತಿ ಭೋಜನದ ವೇಳೆ ಮನೋರಂಜಕ ಘಟನೆಯೊಂದು ಸಂಭವಿಸಿತು. ಔತಣದ ಎಲ್ಲ ವಸ್ತುಗಳೂ ಸಿದ್ಧವಾದ ಬಳಿಕ ಮೋಶಿಯೇ ಬೋನೆಟ್

(ಫ್ರಾನ್ಸಿನ ರಾಜದೂತರು) ತಮ್ಮ ಪತ್ನಿಯೊಂದಿಗೆ ಎಲ್ಲಾ ಪದಾರ್ಥಗಳ ನ್ನೊಮ್ಮೆ ನೋಡುತ್ತ 'ಟ್ರಫಲ್ಸ್' (ಒಂದು ಪದಾರ್ಥ) ದಿಂದ ದುರ್ಗಂಧ ಹೊರಡುತ್ತಿದೆಯೆಂದು ದೂರಿಟ್ಟರು. ಶ್ರೀಮತಿ ಬೋನೆಟ್ ತನ್ನ ಹತ್ತಿರವೆ ಇದ್ದ ನಾಯಿಗೆ ಆ ಪದಾರ್ಥವನ್ನು ತುಸು ತಿನ್ನಿಸಿದಳು. ಇತ್ತ ಅತಿಥಿಗಳು ಬರತೊಡಗಿದ್ದರು. ಸ್ವಲ್ಪ ಸಮಯ ಬಳಿಕವೂ ನಾಯಿ ಮೊದಲಿನಂತೆಯೇ ಸ್ವಸ್ಥವಾಗಿದ್ದುದರಿಂದ ಆ ಪದಾರ್ಥದಲ್ಲಿ ಹಾನಿಹಾರಕ ವಸ್ತುವೇನೂ ಸೇರಿಲ್ಲವೆಂದು ಅವರಿಗೆ ಖಚಿತವಾಯಿತು.

ಅತಿಥಿಗಳಿಗೆ ಭಕ್ಷ್ಯಭೋಜ್ಯಗಳನ್ನೆಲ್ಲ ಬಡಿಸಲಾಯಿತು. ಬೋನೆಟ್ ದಂಪತಿಗಳು ಅತಿಥಿಸತ್ಕಾರದಲ್ಲಿ ಮಗ್ನರಾಗಿದ್ದರು. ಅರ್ಧಗಂಟೆಯ ಬಳಿಕ ಒಮ್ಮಿಂದೊಮ್ಮೆ ಅವರ ಅಡಿಗೆಯವನು ಬಂದು.... .......'ನಾಯಿ ಸತ್ತು ಹೋಯಿತೆಂ'ದು ಹೇಳಿದ.

'ಈಗ........? ಅತಿಥಿಗಳಿಗೆ ನಿಜಸಂಗತಿಯನ್ನು ತಿಳಿಸಬೇಡವೆ?'— ಕಳವಳದಿಂದ ಕಿಂಕರ್ತವ್ಯವಿಮೂಢಳಾಗಿ ಶ್ರೀಮತಿ ಬೋನೆಟ್ ಪ್ರಶ್ನಿಸಿದಳು.

ಆಗಲೇ ಅಡಿಗೆಯವನು ಪುನಃ ಪ್ರವೇಶಿಸಿ.... "ಯಾವ ಮೋಟಾರಿನ ಅಡಿಬಿದ್ದು ನಾಯಿ ಸತ್ತುಹೋಗಿದೆಯೋ ಆ ಮೋಟಾರ್ ಚಾಲಕನ ಮೇಲೆ ಮೊಕದ್ದಮೆ ಹೂಡುತ್ತೀರಾ? ಮೋಟಾರಿನ ನಂಬರನ್ನು ನಾನು ಬರೆದಿಟ್ಟಿದ್ದೇನೆ" ಎಂದನು.

ದಂಪತಿಗಳು ಬಿಡುಗಡೆಯ ನಿಟ್ಟುಸಿರಿಟ್ಟರು.

o o o o o

೨೦. ಅಮೇರಿಕದ ಪ್ರಜಾತಂತ್ರಾತ್ಮಕ ವಿಧಾನ ಸಭೆಯ ಅಧ್ಯಕ್ಷತೆಯನ್ನು ಜಾರ್ಜ್ ವಾಶಿಂಗ್ಟನ್ ವಹಿಸಿದ್ದರು. ಸಭಾಸದನೊಬ್ಬನು ಸೈನ್ಯ ಸಂಬಂಧದ ಚರ್ಚೆಯ ವೇಳೆ 'ಅಮೇರಿಕದ ಬಳಿ ಸ್ಥಾಯಿ ಸೈನಿಕರು ೫೦೦೦ಕ್ಕಿಂತ ಹೆಚ್ಚಿರಬಾರದು' ಎಂಬ ಸೂಚನೆಯೊಂದನ್ನು ಮಂಡಿಸಿದನು. ಅಧ್ಯಕ್ಷರಾದುದರಿಂದ ಸ್ವತಃ ವಾಶಿಂಗ್ಟನ್ ಇದನ್ನು ವಿರೋಧಿಸಲಾರರು, ಆದ್ದರಿಂದ ಪಕ್ಕದಲ್ಲಿ ಕುಳಿತ ಸಭಾಸದನೊಬ್ಬನ ಕಿವಿಯಲ್ಲಿ ಹೀಗೆಂದರು.... "ಯಾವ ದೇಶವೂ ಇನ್ನುಮುಂದೆ ಮೂರುಸಾವಿರಕ್ಕಿಂತ ಹೆಚ್ಚು ಸೈನಿಕ

ರನ್ನು ತೆಗೆದುಕೊಂಡು ಅಮೇರಿಕದ ಮೇಲೆ ದಾಳಿಯಿಡಬಾರದೆಂದು ನೀವೂ ಇದರೊಟ್ಟಿಗೆ ಇನ್ನೊಂದು ಸೂಚನೆಯನ್ನು ಮುಂದಿಡಿರಿ."

o o o o o

೨೧. ಬಂಗಾಳದ ನವಾಬ್ ಸಿರಾಜುದ್ದೌಲರು ತುಂಬ ಹರಟೆಮಲ್ಲರಾಗಿದ್ದರು. ಒಂದು ಬಾರಿ ಅವರು ತಮ್ಮ ದರಬಾರಿಗಳೊಡನೆ....'ಹಿಂದುಗಳ ಪಂಚಾಂಗದಲ್ಲಿ ಗ್ರಹಣ ಹಾಗೂ ಜ್ಯೋತಿಷ್ಯಕ್ಕೆ ಸಂಬಂಧಿಸಿದ ಇತರ ವಿಷಯಗಳೆಷ್ಟೋ ಇರುತ್ತವೆ. ಆದರೆ ಭೂಕಂಪದ ದಿನ ಹಾಗೂ ಸಮಯದ ಉಲ್ಲೇಖವೇಕಿರುವುದಿಲ್ಲ?' ಎಂದು ಪ್ರಶ್ನಿಸಿದರು.

ಪಂಡಿತರೆಲ್ಲ ತಲೆತುರಿಸತೊಡಗಿದರು. ಪಾಪ! ಅವರೇನು ಉತ್ತರ ಕೊಟ್ಟಾರು?

ನವಾಬರ ಈ ವಿಲಕ್ಷಣ ಪ್ರಶ್ನೆಯು ಕೃಷ್ಣನಗರದ ರಾಜದರಬಾರಿಗೂ ಹೋಯಿತು. ಕೃಷ್ಣನಗರದ ವಿನೋದಿ ದರಬಾರಿಯಾದ 'ಗೋಪಾಲ ಭಾಂಡ'ರು ಇದನ್ನು ಕೇಳಿ ತಕ್ಕ ಉತ್ತರಕೊಡಲು ನವಾಬರ ಆಸ್ಥಾನಕ್ಕೆ ಆಗಮಿಸಿದರು. ಅವರು ತುಂಬಿದ ಸಭೆಯಲ್ಲಿ ಗಂಭೀರವಾಗಿ ಹೀಗೆಂದರು— "ಹುಜೂರ್! ಹಿಂದುಗಳು ಹೆಣಗಳನ್ನು ಸುಟ್ಟುಹಾಕುತ್ತಾರೆ. ಅವರ ಆತ್ಮಗಳು ನೇರಾಗಿ ಸ್ವರ್ಗ(ಆಕಾಶ)ಕ್ಕೆ ಹೋಗಿ, ಅಲ್ಲಿಂದ ತಮ್ಮ ಕುಟುಂಬದವರಿಗೆ ಆಕಾಶ, ನಕ್ಷತ್ರ ಮೊದಲಾದವುಗಳ ವಿಚಾರಗಳನ್ನು ತಿಳಿಸುತ್ತವೆ. ಆದರೆ (ನನ್ನೀ ಉದ್ಧಟತನವನ್ನು ಕ್ಷಮಿಸಿರಿ!) ಮುಸಲ್ಮಾನರ ಹೆಣಗಳನ್ನು ಹುಗಿಯಲಾಗುತ್ತದೆ. ಅವರ ಆತ್ಮಗಳೆಲ್ಲ ಭೂಗರ್ಭದೊಳಗೆ ಪ್ರವೇಶಿಸುತ್ತವೆ. ಭೂಕಂಪವೂ ಭೂಗರ್ಭದಿಂದಲೇ ಉಂಟಾಗುತ್ತದೆ. ಆದ್ದರಿಂದ ಈ ಪ್ರಶ್ನೆಯನ್ನು ನಿಮ್ಮ ಮತದವರೊಡನೆಯೇ ಕೇಳಿರಿ. ಅಲ್ಲಿನ ಸಂಗತಿಗಳನ್ನು ಅವರೇ ತಿಳಿಸಬಲ್ಲರು."

o o o o o

೨೨. ಕಾರ್ನೆಲ್ ಯೂನಿವರ್ಸಿಟಿ (ಅಮೇರಿಕ)ಯ ಒಬ್ಬ ಪ್ರಖ್ಯಾತ ಪ್ರೊಫೆಸರರಾದ ಶ್ರೀ। 'ಎಸ್. ಜಾನ'ರಿಗೆ ತಮ್ಮಷ್ಟಕ್ಕೇ ಮಾತಾಡಿಕೊಳ್ಳುವ ಚಟವಿತ್ತು. ಇದಕ್ಕಾಗಿ ಅವರ ಸಹೋದ್ಯೋಗಿಗಳೂ ವಿದ್ಯಾರ್ಥಿಗಳೂ ಅವರನ್ನು ಆಗಾಗ್ಗೆ ತಮಾಷೆಗೈಯುತ್ತಿದ್ದರು.

ಒಂದು ದಿನ ಟೀಪಾರ್ಟಿಯ ವೇಳೆ ಅವರನ್ನು ಗೇಲಿಮಾಡುವ ಉದ್ದೇಶದಿಂದ ಅವರ ಸಹೋದ್ಯೋಗಿಗಳೊಬ್ಬರು—'ನೀವು ಯಾವಾಗಲೂ ನಿಮ್ಮಷ್ಟಕ್ಕೇ ಮಾತಾಡಿಕೊಳ್ಳುತ್ತೀರಿ. ಇದನ್ನು ಅಭ್ಯಾಸವಶದಿಂದ ಮಾಡುತ್ತೀರಾ? ಅಥವಾ ಬೇರಾವ ವಿಶೇಷ ಕಾರಣದಿಂದಲೋ?' ಎಂದು ಪ್ರಶ್ನಿಸಿದರು.

'ಕಾರಣ ಒಂದಲ್ಲ, ಎರಡು'—ಎನ್ನುತ್ತಾ ಪ್ರೊಫೆಸರರು ಗಂಭೀರ ರಾಗಿ, 'ಮೊದಲನೆಯದಾಗಿ ನಾನು ಯಾವಾಗಲೂ ಬುದ್ಧಿವಂತರ ಮಾತು ಗಳನ್ನೇ ಕೇಳಲಿಚ್ಛಿಸುತ್ತೇನೆ. ಎರಡನೆಯದಾಗಿ ನಾನು ಬುದ್ಧಿವಂತರೊಡ ನೆಯೇ ಮಾತಾಡಬಯಸುತ್ತೇನೆ. ನಾನು ನನ್ನೊಡನೆ ಮಾತಾಡುವಾಗ ಈ ಎರಡೂ ಉದ್ದೇಶಗಳು ಪೂರ್ತಿಗೊಳ್ಳುವುವು' ಎಂದರು.

o o o o o

೩೩. ಪ್ರಸಿದ್ಧ ಹಾಸ್ಯರಸಜ್ಞರೆನಿಸಿದ ಸ್ಟೀಫೆನ್ ಲೀಕಾಕರು ತಮ್ಮ ಮಿತ್ರಮಂಡಲಿಯಲ್ಲಿ ಸೇರಿಕೊಂಡಿದ್ದರೆ ಹಾಸ್ಯದ ಹುಚ್ಚು ಹೊಳೆಯೇ ಹರಿಯಿತೆಂದು ಭಾವಿಸಬಹುದು. ಅವರ ತೀಕ್ಷ್ಣ ವ್ಯಂಗ್ಯ ಹಾಗೂ ಕತೆ ಗಳನ್ನು ಕೇಳಿ ಎಂತಹ ಗಂಭೀರ ವ್ಯಕ್ತಿಗಳೂ ನಗಬೇಕಾಗುತ್ತಿತ್ತು. ಅವರ ಕಥೆಗಳಲ್ಲಿ ಅತ್ಯಂತ ಮನೋರಂಜಕವಾದ ಭಿಕ್ಷುಕನ ಕತೆಯು ಸಂಕ್ಷೇಪ ವಾಗಿ ಹೀಗಿದೆ:—

ಹಸಿವೆಯಿಂದ ಪೀಡಿತನಾದ ಭಿಕ್ಷುಕನೊಬ್ಬನು ಪಟ್ಟಣದ ಉದಾರಿ ನಾಗರಿಕನೊಬ್ಬನ ಮನೆಗೆ ಹೋದ. ಮನೆಯ ಯಜಮಾನನು ಅವನನ್ನು ಆಪಾದಮಸ್ತಕದ ವರೆಗೆ ದಿಟ್ಟಿಸಿ ಕರುಣೆಯಿಂದ—'ನಿನಗೇನು ಬೇಕು?' ಎಂದು ಕೇಳಿದ. ಭಿಕ್ಷುಕನಿಗೆ ತುಸು ಆಸರೆ ಸಿಕ್ಕಂತಾಯಿತು. 'ನಾನು ಎರಡು ದಿನಗಳಿಂದ ಹಸಿದಿದ್ದೇನೆ. ತಿನ್ನಲು ಏನಾದರೂ ಸಿಕ್ಕರೆ........'

'ತಿನ್ನಲು........?' ಎಂದು ಪ್ರಶ್ನಿಸಿ ಮನೆಯೊಡೆಯನು ತುಸು ಹೊತ್ತು ಸುಮ್ಮನಿದ್ದು—'ನಿನ್ನೆ ಮಾಡಿದ ಅನ್ನ ತಿನ್ನಲು ನಿನಗೇನೂ ಅಡ್ಡಿ ಯಿಲ್ಲವಷ್ಟೆ?' ಎಂದು ಕೇಳಿದ.

'ಅಡ್ಡಿಯೇತರದು? ನಾನು ನಿಮ್ಮ ಈ ಉಪಕಾರವನ್ನೆಂದೂ ಮರೆಯ ಲಾರೆ. ಹಸಿವೆಯಿಂದ ನಾನೀಗ ಸಾಯುತ್ತಿದ್ದೇನೆ.' ಕೃತಜ್ಞತೆಯ ಮುಖ ಮುದ್ರೆಯಿಂದ ಅವನು ಹೇಳಿದ.

'ಸರಿ; ನೀನು ನಾಳೆ ಇಷ್ಟೇ ಹೊತ್ತಿಗೆ ಬಾ; ಇಂದಿನ ಅನ್ನದಲ್ಲಿ ಸ್ವಲ್ಪವನ್ನು ನಿನಗಾಗಿ ತಪ್ಪದೆ ತೆಗೆದಿರಿಸುತ್ತೇನೆ.' ಮನೆಯೊಡೆಯನು ಕರುಣಾದ್ರ್ರಹೃದಯನಾಗಿ ಉತ್ತರವಿತ್ತನು.

o o o o o

೨೪. ಶೋಪೆನ್‌ಹೋವರರು ತಮ್ಮ ಪುಸ್ತಕಗಳಿಗೆ ಸಂಬಂಧಿಸಿದ ಕಟುಟೀಕೆಗಳನ್ನೋದಿ ಸಿಟ್ಟಾಗಿ ಹೀಗೆಂದರು........'ನನ್ನ ಪುಸ್ತಕಗಳು ಕನ್ನಡಿಯಂತಿವೆ. ಅದರಲ್ಲಿ ಯಾವುದಾದರೂ ಕತ್ತೆಯು ಇಣಿಕಿದರೆ ಅದಕ್ಕೆ ದೇವದೂತನ ರೂಪವು ಅದೆಂತು ತೋರಿಬರಬೇಕು?'

o o o o o o o o

೨೫. ಒಮ್ಮೆ ಒಬ್ಬರು ಮಾರ್ಕ್‌ಟ್ವೇನರನ್ನು ಭೇಟಿಯಾಗಲು ಬಂದರು. ಅವರ ಮನೆಯಲ್ಲಿ ಪುಸ್ತಕಗಳು ರಾಶಿರಾಶಿಯಾಗಿ ಬಿದ್ದಿದ್ದುವು. ಎಲ್ಲಾ ಕವಾಟುಗಳೂ ತುಂಬಿ ಹೋಗಿದ್ದುವು. ನೆಲ, ಕಿಟಕಿ—ಎಲ್ಲೆಲ್ಲೂ ಪುಸ್ತಕಗಳೇ ಕಾಣಿಸುತ್ತಿದ್ದವು. ಅತಿಥಿಗಳು ಅವನ್ನು ಕಂಡು........ 'ಪುಸ್ತಕಗಳು ಹೀಗೆ ಬಿದ್ದಿರುವುದು ಸರಿಯಲ್ಲ. ಇವುಗಳಿಗಾಗಿ ಕವಾಟುಗಳು ಬೇಕೇಬೇಕು.' ಎಂದರು.

'ನಿಮ್ಮ ಹೇಳಿಕೆಯೇನೋ ಸರಿಯೆ; ಆದರೆ ಕವಾಟುಗಳನ್ನು ಕಡವಾಗಿ ಯಾರು ಕೊಡುತ್ತಾರೆ?'—ಟ್ವೇನರೆಂದರು.

o o o o o o o o

೨೬. 'ಪ್ರಶ್ಯಾ'ದ ಕುಪ್ರಸಿದ್ಧ ರಾಜನಾದ ಫ್ರೆಡರಿಕ್ II ತನ್ನ ಕುರುಚಿಪೂರ್ಣ ವಿನೋದಕ್ಕಾಗಿ ಕೆಟ್ಟ ಹೆಸರು ಪಡೆದಿದ್ದ. ಒಂದುದಿನ ಅವನ ದರ್ಬಾರಿಗೆ ಮೆಂಡಲ್‌ಜಾನ್ ಎಂಬ ಪ್ರಸಿದ್ಧ ಗವಾಯಿಯೊಬ್ಬನು ಬಂದನು. ಅವನ ಅಪ್ರತಿಮ ಸಂಗೀತದಿಂದ ಜನರೆಲ್ಲರೂ ಆನಂದತುಂದಿಲರಾದರು. ರಾಜನು ಇವನಿಗೆ ಅಮೂಲ್ಯ ಉಪಹಾರ ಕೊಡಬಹುದೆಂದು ಎಲ್ಲರೂ ಭಾವಿಸಿದರು. ಆದರೆ ರಾಜನು ಒಂದು ಕಾಗದದ ತುಂಡಿನ ಮೇಲೆ........Mendaljan is an ass ಎಂದು ಬರೆದು ಕೊಟ್ಟ; ಮತ್ತು ಅದನ್ನು ಎಲ್ಲಾ ಸಭಾಸದರಿಗೂ ಹಂಚಲು ಹೇಳಿದ; ಚತುರ

ಗವಾಯಿಯು ಅದೇ ವಾಕ್ಯವನ್ನು ರಾಜನ ಹಸ್ತಾಕ್ಷರದೊಟ್ಟಿಗೆ ಹೀಗೆ ಓದಿದ: "Mendaljan is **an** ass; Fredric **second!**"

o o o o o o o o

೨೭. ತಾವು ಬ್ರಿಟನ್ನಿನ ಪ್ರಧಾನ ಮಂತ್ರಿಗಳಾಗಿದ್ದಾಗ ಲಾಯಡ್ ಜಾರ್ಜರು ಒಮ್ಮೆ ವೇಲ್ಸಿಗೆ ಹೋಗಿದ್ದರು. ತಮ್ಮ ಸಂಚಾರದ ವೇಳೆ ಅವರು ಹೋಟೆಲಿಲ್ಲದ ಒಂದು ಸ್ಥಳದಲ್ಲಿ ರಾತ್ರಿಯನ್ನು ಕಳೆಯಬೇಕಾಯಿತು. ನಿರುಪಾಯರಾಗಿ ಅವರು ಎದುರಿನ ಒಂದು ದೊಡ್ಡ ಕಟ್ಟಡದ ಬಾಗಿಲಿಗೆ ತಲುಪಿ 'ಕರೆಗಂಟೆ'ಯನ್ನು ಬಾರಿಸಿದರು.

ಕೂಡಲೇ ಸೇವಕನೊಬ್ಬನು ಬಂದು ಬಾಗಿಲು ತೆರೆದ.

'ನಾನು ಈ ಇರುಳನ್ನು ಇಲ್ಲಿಯೇ ಕಳೆಯಬೇಕೆಂದಿದ್ದೇನೆ'— ಜಾರ್ಜರೆಂದರು.

ಸೇವಕನು ಚಕಿತನಾಗಿ........'ಇಲ್ಲಿ? ಇದು ಹುಚ್ಚರಾಸ್ಪತ್ರೆಯೆಂದು ನಿಮಗೆ ತಿಳಿಯದೆ'? ಎಂದು ಪ್ರಶ್ನಿಸಿದನು.

"ಆಗಲಿ, ನನಗೆ ನಿದ್ದೆ ಮಾಡಲು ಸ್ಥಳ ಸಿಕ್ಕರಾಯಿತು. ನಾನು ಬ್ರಿಟನ್ನಿನ ಪ್ರಧಾನ ಮಂತ್ರಿ ಲಾಯಡ್ ಜಾರ್ಜ........"

ಸೇವಕ ತುಸುಹೊತ್ತು ಅವರನ್ನೇ ಆಪಾದಮಸ್ತಕವಾಗಿ ದಿಟ್ಟಿಸಿ ಹೀಗೆಂದ—'ಹಾಗಿದ್ದರೆ ನೀವಿಲ್ಲಿ ನಿಸ್ಸಂಕೋಚವಾಗಿ ಮಲಗಿಕೊಳ್ಳಬಹುದು. ಈ ಸ್ಥಳ ನಿಮಗಾಗಿಯೇ ಕಾದಿದೆ. ಏಕೆಂದರೆ ಈಗಾಗಲೇ ಐವರು ಲಾಯಡ್ ಜಾರ್ಜರು ಇಲ್ಲಿಗೆ ಬಂದು ಬಿಟ್ಟಿದ್ದಾರೆ.'

o o o o o

೨೮. ಅಲೀಗಢದ ಮುಸ್ಲಿಂ ಕಾಲೇಜಿನ ಸಂಸ್ಥಾಪಕರಾದ ಸ್ವರ್ಗೀಯ ಸಯ್ಯದ್ ಅಹಮದ್ ಖಾನರು ಒಮ್ಮೆ ಅಲ್ಹಾಬಾದಿಗೆ ಹೋಗುತ್ತಿದ್ದರು. ಯಾವುದೊ ಸ್ಟೇಶನಿನಲ್ಲಿ ಹೈಕೋರ್ಟಿನ ಜಡ್ಜರೊಬ್ಬರು ಅದೇ ಡಬ್ಬಿಯನ್ನೇರಿ ಕುಳಿತರು. ಯಾವುದೋ ವಿಷಯಕ್ಕಾಗಿ ಇಬ್ಬರಲ್ಲಿ ಬಿರುಸಿನ ಚರ್ಚೆಯಾಯಿತು. ಆಗ ಆ ಜಡ್ಜರು ಸಿಟ್ಟಾಗಿ 'ನಾನು ಹೈಕೋರ್ಟಿನ ಜಡ್ಜನೆಂದು ನಿಮಗೆ ಗೊತ್ತಿದೆಯಷ್ಟೆ!' ಎಂದು ಹೇಳಿದರು.'ನಾನು ಹೈಕೋರ್ಟ್ ಜಡ್ಜನ

ತಂದೆ!'—ಖಾನರು ಅದೇ ಧ್ವನಿಯಲ್ಲಿ ಉತ್ತರವಿತ್ತರು. ಜಡ್ಜರು ಆಗ ಕಮ್ಮ ಸಿಟ್ಟನ್ನು ನುಂಗಿಕೊಂಡರೂ ಅಲ್ಹಾಬಾದ್ ಸ್ಟೇಶನಿಗೆ ಗಾಡಿ ತಲಪುತ್ತಲೇ ಪೋಲೀಸರನ್ನು ಕರೆತಂದರು! ಜನಸಂದಣಿಯನ್ನು ಕಂಡು ಸ್ಟೇಶನ್ ಮಾಸ್ತರರೂ ಓಡಿಬಂದರು. ಸ್ಟೇಶನ್ ಮಾಸ್ಟರರಿಗೆ ಖಾನರ ಪರಿಚಯು ಚೆನ್ನಾಗಿ ಇತ್ತು.

ಅವರು ಆ ಜಡ್ಜರಿಂದ ಎಲ್ಲಾ ಸಮಾಚಾರವನ್ನೂ ಕೇಳಿ ಮುಗುಳ್ನಗುತ್ತಾ ಅವರೊಡನೆ 'ಇವರೇನೂ ಸುಳ್ಳು ಹೇಳಿಲ್ಲ. ಇವರು ಹೈಕೋರ್ಟಿನ ಪ್ರಸಿದ್ಧ ಜಡ್ಜರಾದ ಸೈಯುದ್ ಮೆಹಬೂಬರ ತಂದೆ' ಎಂದರು. ಜಡ್ಜರು ಈ ವಿಚಾರ ಕೇಳಿ ಲಜ್ಜಿತರಾದರು ಮತ್ತು ಸರ್ ಸೈಯುದ್ ಖಾನರೊಡನೆ ಕ್ಷಮೆ ಬೇಡಿದರು.

o o o o o

೨೯. ಪ್ರಸಿದ್ಧ ಉರ್ದೂ ಕವಿಗಳಾದ 'ಮಿರ್ಜಾ ಗಾಲಿಬ್'ರವರಿಗೆ ಆವರ ವಿರೋಧಿಗಳಿಂದ ಅಸಭ್ಯತಾಪೂರ್ಣ ಪತ್ರವೊಂದು ತಲುಪಿತು. ಅವರು ಅದನ್ನೋದಿ ಸುಮ್ಮನಾದರು. ಅದಕ್ಕುತ್ತರಕೊಡಬೇಕೆಂದು ಶಿಷ್ಯರು ಪುನಃ ಪುನಃ ಹೇಳಿದಾಗ ಅವರೆಂದರು—'ಒಂದು ಕತ್ತೆ ನಿಮ್ಮನ್ನೊದೆಯಿತೆಂದು ನೀವೂ ಅದನ್ನು ಒದೆಯುತ್ತೀರಾ?'

o o o o o o o o

೩೦. ಒಮ್ಮೆ ಸುಂದರಿಯೊಬ್ಬಳು ಬರ್ನಡ್ ಶಾರೊಡನೆ 'ನಾವಿಬ್ಬರೂ ಪರಸ್ಪರ ವಿವಾಹಿತರಾದರೆ ನಮ್ಮಿಂದ ಜನಿಸುವ ಸಂತಾನವು ಆದರ್ಶಪ್ರಾಯವಾಗುವುದರಲ್ಲಿ ಸಂದೇಹವಿಲ್ಲ. ಏಕೆಂದರೆ, ಅದಕ್ಕೆ ನಿಮ್ಮ ಅಸಾಧಾರಣ ಬುದ್ಧಿಯೂ ನನ್ನ ಮೋಹಕ ಸೌಂದರ್ಯವೂ ದೊರೆಯುತ್ತದೆ' ಎಂದು ಉತ್ಸಾಹದಿಂದ ಹೇಳಿದಳು. ಒಡನೆಯೇ ಶಾ ಹೀಗೆಂದರು,—'ಆದರೆ ಅದಕ್ಕೆಲ್ಲಾದರೂ ನನ್ನ ರೂಪ ಹಾಗೂ ನಿಮ್ಮ ಬುದ್ಧಿ ಸಿಕ್ಕಿಬಿಟ್ಟರೆ!'



# ಒಂದಾಣೆ ಮಾಲೆಯ ಪುಸ್ತಕಗಳು ಟಪ್ಪಾಲು ಮೂಲಕ ಬೇಕಾದವರಿಗೆ

ಒಂದಾಣೆ ಮಾಲೆಯ ಪುಸ್ತಕಗಳನ್ನು ಆಯಾಯ ಸ್ಥಳದ ಏಜಂಟರಿಂದಲೇ ಪಡಕೊಳ್ಳುವುದು ಒಳ್ಳೇದು. ಇದರಿಂದ ಟಪ್ಪಾಲು ಖರ್ಚು ಉಳಿಯುವುದು.

ಏಜಂಟರು ಇಲ್ಲದ ಕಡೆಗಳಲ್ಲಿ, ಟಪ್ಪಾಲು ಮೂಲಕ ಅಪೇಕ್ಷಿಸುವವರು, ಬೇಕಾದ ಪುಸ್ತಕಗಳ ಕ್ರಯವನ್ನೂ, ಟಪ್ಪಾಲು ಖರ್ಚನ್ನೂ ಮುಂಗಡವಾಗಿ ಕಳುಹಿಸಬೇಕು. ಪ್ರತಿ ಪುಸ್ತಕದ ಬೆಲೆ ಒಂದಾಣೆ. ಸಾಧಾರಣ ಪ್ರತಿ ಮೂರು ಪುಸ್ತಕಗಳಿಗೆ ಟಪ್ಪಾಲು ಖರ್ಚು ಒಂದಾಣೆ. ಈ ಪ್ರಕಾರ ಕಳುಹಿಸಬೇಕು.

ಒಂದು ವರ್ಷದ 52 ಪುಸ್ತಕಗಳು ಬೇಕಾದವರು, ರೂ. 4-8-0 ಮುಂಗಡವಾಗಿ ಕಳುಹಿಸಿದರೆ, ಆಗಲೇ ಪ್ರಕಟವಾಗಿದ್ದ ಪುಸ್ತಕಗಳನ್ನು ಹಣ ತಲಪಿದ ಕೂಡಲೆ ಕಳುಹಿಸುವುದಲ್ಲದೆ, ಆ ಮೇಲೆ ಒಮ್ಮೆಗೆ ಪ್ರತೀ ಮೂರು ಅಥವಾ ನಾಲ್ಕು ಪುಸ್ತಕಗಳಂತೆ ಅವುಗಳು ಪ್ರಕಟವಾದ ಹಾಗೆ, ಒಟ್ಟು 52 ಪುಸ್ತಕಗಳಾಗುವ ವರೆಗೆ ಟಪ್ಪಾಲಿನಲ್ಲಿ ಕಳುಹಿಸಲಾಗುವುದು.

ವಿ. ಪಿ. ಕಳುಹಿಸಲಾಗುವುದಿಲ್ಲ.

ಒಂದಾಣೆ ಮಾಲೆ,

ಪ್ರಭಾತ ಆಫೀಸು :: ರಥಬೀದಿ :: ಮಂಗಳೂರು-೧.

Edited, Printed and Published by K. V. Shenoy
at The Prabhat Printers, Ltd., Mangalore-1.